# ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : (211) 159
2. ಸದಸ್ಯರ ಹೆಸರು : ಶ್ರೀ ಅರವಿಂದ ಕುಮಾರ ಅರಳಿ
3. ಉತ್ತರಿಸಬೇಕಾದ ದಿನಾಂಕ : 02-02-2021
4. ಉತ್ತರಿಸುವ ಸಚಿವರು : ಮಾನ್ಯ ನಗರಾಭಿವೃದ್ಧಿ ಸಚಿವರು.

| ಕ್ರ. ಸಂ. | ಪ್ರಶ್ನೆಗಳು | ಉತ್ತರ |
|---|---|---|
| ಅ) | ಬೀದರ್ ನಗರ ಸಭೆ ವ್ಯಾಪ್ತಿಯ ಎಲ್ಲಾ 35 ವಾರ್ಡ್‌ಗಳಲ್ಲಿ ದಿನದ 24 ಗಂಟೆ ಕುಡಿಯುವ ನೀರು ಪೂರೈಕೆ ಯೋಜನೆ ಆರಂಭವಾಗಿದೆಯೇ? | ಏಷ್ಯಿಯನ್ ಅಭಿವೃದ್ಧಿ ಬ್ಯಾಂಕ್ ನೆರವಿನ ಉತ್ತರ ಕರ್ನಾಟಕ ನಗರ ವಲಯ ಬಂಡವಾಳ ಹೂಡಿಕಾ ಕಾರ್ಯಕ್ರಮದಡಿಯಲ್ಲಿ (ಎನ್‌ಕೆಯುಎಸ್‌ಐಪಿ) ಬೀದರ್ ನಗರದಲ್ಲಿ 24 ಗಂಟೆ ಕುಡಿಯುವ ನೀರು ಪೂರೈಕೆ ಯೋಜನೆಯ ಕಾಮಗಾರಿಯನ್ನು 28 ವಾರ್ಡ್‌ಗಳಲ್ಲಿ ಕೈಗೆತ್ತಿಗೊಂಡಿದ್ದು, ಗುತ್ತಿಗೆ ಕರಾರಿನಲ್ಲಿ ನಿಗಧಿಪಡಿಸಿದ ಕಾಮಗಾರಿ ಪೂರ್ಣಗೊಳಿಸಲಾಗಿದೆ. ಉಳಿದ 7 ವಾರ್ಡ್‌ಗಳಲ್ಲಿ ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯವರು ಕಾಮಗಾರಿ ಕೈಗೊಂಡಿರುತ್ತಾರೆ. ತದನಂತರ 35 ವಾರ್ಡ್‌ಗಳ ಕುಡಿಯುವ ನೀರು ಸರಬರಾಜು ಮತ್ತು ನಿರ್ವಹಣೆಯನ್ನು ಗುತ್ತಿಗೆ ಕರಾರಿನಂತೆ ಮೆ//ವಿಶ್ವರಾಜ್ ಇನ್‌ಫ್ರಾಸ್ಟ್ರಕ್ಚರ್ಸ್ ಲಿ. ಮುಂಬೈ, ಗುತ್ತಿಗೆದಾರರಿಗೆ ನಿರ್ವಹಣೆ ಮಾಡಲು ಹಸ್ತಾಂತರಿಸಲಾಗಿದೆ.<br><br>ಬೀದರ್ ನಗರಕ್ಕೆ 24 ಗಂಟೆ ನೀರು ಸರಬರಾಜು ಯೋಜನೆ ವಿಸ್ತೃತ ಯೋಜನೆ ತಯಾರಿಸುವಾಗ ಕಾರಂಜ ಜಲಾಶಯ ಮತ್ತು ಮಾಂಜ್ರಾ ನದಿ ಮೂಲದಿಂದ ಸಗಟು ನೀರು ಸರಬರಾಜು ಮಾಡಲಾಗುತ್ತಿತ್ತು.<br><br>2014ರಿಂದ ಮಾಂಜ್ರಾ ನದಿಯು ಬೇಸಿಗೆ ಸಮಯದಲ್ಲಿ ಬತ್ತಿಹೋಗುತ್ತಿರುತ್ತದೆ ಹಾಗೂ ಇದರ ನಿರ್ವಹಣೆ ಸ್ಥಗಿತಗೊಳಿಸಲಾಗಿದೆ. ಈ ಕಾರಣದಿಂದ ಸಗಟು ನೀರು ಸರಬರಾಜಿನಲ್ಲಿ ಕೊರತೆ ಉಂಟಾಗಿದೆ. ಆದುದರಿಂದ Intermittent ಆಗಿ ಬೀದರ್ ನಗರಕ್ಕೆ ನೀರು ಸರಬರಾಜು ಮಾಡಲಾಗುತ್ತಿದೆ. ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯವರು ಕೈಗೊಂಡಿದ್ದ 7 ವಾರ್ಡ್‌ಗಳಲ್ಲಿ 24 ಗಂಟೆ ನೀರು ಸರಬರಾಜು ಮಾಡಲು ವಿತರಣಾ ಜಾಲವನ್ನು ಮಾರ್ಪಡಿಸಿ ಕೆಲವು ಅಭಿವೃದ್ಧಿ ಕಾಮಗಾರಿಗಳನ್ನು ಕೈಗೊಳ್ಳಬೇಕಾಗಿರುತ್ತದೆ. |

| ಕ್ರ. ಸಂ. | ಪ್ರಶ್ನೆಗಳು | ಉತ್ತರ |
|---|---|---|
| ಆ) | ಈ ಯೋಜನೆಗಾಗಿ ಸರ್ಕಾರ ಇಲ್ಲಿಯವರೆಗೆ ಎಷ್ಟು ಹಣ ಖರ್ಚು ಮಾಡಿದೆ; ಇನ್ನೂ ಎಷ್ಟು ಕಾಮಗಾರಿ ಬಾಕಿ ಇದೆ; ಕಾಮಗಾರಿ ಯಾವ ಏಜೆನ್ಸಿಗೆ ನೀಡಲಾಗಿದೆ? | ಈ ಯೋಜನೆಯ ನಿರ್ಮಾಣ ಹಂತದ ಕಾಮಗಾರಿಗೆ ಇಲ್ಲಿಯವರೆಗೆ ರೂ.32.85 ಕೋಟಿ ಹಣ ಖರ್ಚು ಮಾಡಲಾಗಿದೆ. ಇದರಲ್ಲಿ 28 ವಾರ್ಡ್‌ಗಳಲ್ಲಿ ವಿತರಣಾ ಜಾಲ ಹಾಗೂ 35 ವಾರ್ಡ್‌ಗಳಲ್ಲಿ ಮನೆಗಳಿಗೆ ನಳ ಸಂಪರ್ಕ ನೀಡುವ ಕಾಮಗಾರಿ ಗುತ್ತಿಗೆ ಕರಾರಿನಲ್ಲಿ ನಿಗಧಿಪಡಿಸಿದಂತೆ ಕಾಮಗಾರಿ ಪೂರ್ಣಗೊಳಿಸಲಾಗಿದೆ. ಕರಾರಿನ ಪ್ರಕಾರ ಯೋಜನೆಯು ಕಾರ್ಯಚರಣೆ ಮತ್ತು ನಿರ್ವಹಣೆ ಹಂತದಲ್ಲಿದ್ದು ಗುತ್ತಿಗೆದಾರರು ನಿರ್ವಹಣೆಯನ್ನು ನಿರ್ವಹಿಸುತ್ತಿದ್ದಾರೆ.<br><br>ಈ ಕಾಮಗಾರಿಯನ್ನು ಮೆ//ವಿಶ್ವರಾಜ್ ಇನ್‌ಫ್ರಾಸ್ಟ್ರಕ್ಚರ್ಸ್ ಲಿ. ಮುಂಬೈ ರವರಿಗೆ ನೀಡಲಾಗಿದೆ. |
| ಇ) | ಯೋಜನೆ ಕಾಮಗಾರಿ ಕಳಪೆಯಾಗಿರುವುದರಿಂದ ಅನೇಕ ಕಡೆ ಪೈಪುಗಳು ಒಡೆದು ನೀರು ಪೋಲಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಗುತ್ತಿಗೆ ಕರಾರಿನ ಪ್ರಕಾರ ಕಾಮಗಾರಿಯ ಗುಣಮಟ್ಟ ಕಾಯ್ದಿರಿಸಲು 3ನೇ ಸಮಾಲೋಚಕರು ಗುಣಮಟ್ಟ ಪರೀಕ್ಷಿಸಿ ಪ್ರಮಾಣೀಕರಿಸಿದ ನಂತರ ಕಾಮಗಾರಿಗಳನ್ನು ಒಪ್ಪಿಕೊಳ್ಳಲಾಗಿದೆ. ಆದರಂತೆ, ಕೈಗೊಂಡಿರುವ ಕಾಮಗಾರಿಗಳಲ್ಲಿ ಯಾವುದೇ ಗುರುತರವಾದ ಲೋಪದೋಷಗಳು ವರದಿಯಾಗಿರುವುದಿಲ್ಲ. ಅನೇಕ ಕಡೆ ಇತರೆ ಇಲಾಖೆಗಳಿಂದ / ಸಾರ್ವಜನಿಕರಿಂದ ಕಾಮಗಾರಿ ನಿರ್ವಹಿಸುವಾಗ ನೀರು ಸರಬರಾಜು ಕೊಳವೆಗಳನ್ನು ಹಾನಿ ಉಂಟುಮಾಡಿದ ಕಾರಣ ನೀರು ಪೋಲಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆ. ಇದನ್ನು ಆಗಿಂದಾಗ್ಯೆ ನಗರಸಭಾ ಪೌರಾಯುಕ್ತರ ಗಮನಕ್ಕೆ ತಂದು ಸರಿಪಡಿಸಲು ಗುತ್ತಿಗೆದಾರರಿಗೆ ಆದೇಶ ನೀಡಲಾಗಿದೆ. |

ಕಡತ ಸಂಖ್ಯೆ: ನಅಇ 16 ಪಿ.ಆರ್.ಜೆ 2021

(ಬಿ.ಎ. ಬಸವರಾಜ)
ನಗರಾಭಿವೃದ್ಧಿ ಸಚಿವರು.